


# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 243 (1873)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು )

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಮೂಲ ವಿಜ್ಞಾನದ ಕುರಿತಂತೆ ರಾಜ್ಯದ ವಿದ್ಯಾರ್ಥಿಗಳಲ್ಲಿರುವ ಆಸಕ್ತಿ ಕುರಿತು

(ಅ) ಮೂಲ ವಿಜ್ಞಾನದ ಕುರಿತಂತೆ ರಾಜ್ಯದ ವಿದ್ಯಾರ್ಥಿಗಳಲ್ಲಿ ಆಸಕ್ತಿ ಯಾವ ಮಟ್ಟದಲ್ಲಿದೆ;

(ಆ) ಮೂಲ ವಿಜ್ಞಾನದ ಅಧ್ಯಯನದಲ್ಲಿ ಶಿಕ್ಷಣ ಪಡೆಯುವವರಿಗೆ ಗುಣ ಮಟ್ಟದ ಅಧ್ಯಯನ ನೀಡಲಾಗುತ್ತಿದೆಯೇ; (ವಿವರ ಒದಗಿಸುವುದು)

(ಇ) ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಮೂಲ ವಿಜ್ಞಾನದ ಕುರಿತು ಆಸಕ್ತಿ ಬೆಳಸುವಲ್ಲಿ ಇರುವ ಕೊರೆತೆಗಳನ್ನು ತುಂಬಲು ಸರ್ಕಾರ ನಡೆಸುತ್ತಿರುವ ಪ್ರಯತ್ನಗಳೇನು;

(ಈ) ಯೋಗ್ಯ ಹಾಗೂ ಗುಣಮಟ್ಟದ ವಿಜ್ಞಾನ ಮತ್ತು ಗಣಿತ ಶಿಕ್ಷಕರ ಕೊರತೆ ನೀಗಿಸಲು ಸರ್ಕಾರ ನಡೆಸುತ್ತಿರುವ ಪ್ರಯತ್ನಗಳೇನು;

(ಉ) ಹತ್ತನೇ ತರಗತಿ ನಂತರ ನಾಲ್ಕು ವರ್ಷಗಳ ಅವಧಿಯ ಕೋರ್ಸ್‌ನ್ನು ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣದ ಮಕ್ಕಳಿಗೆ ವಿಜ್ಞಾನ ಮತ್ತು ಗಣಿತ ಬೋಧನೆ ಮಾಡುವ ಶಿಕ್ಷಕರನ್ನೇ ರೂಪಿಸುವ ಕೋರ್ಸ್ ಆರಂಭ ಮಾಡುವ ಬಗ್ಗೆ ಸರ್ಕಾರದ ಪ್ರಯತ್ನಗಳೇನು;

(ಊ) ಹತ್ತನೇ ತರಗತಿ ನಂತರ ಆರು ವರ್ಷ ಕೋರ್ಸ್‌ನ್ನು ಕೇವಲ ಮೂಲ ವಿಜ್ಞಾನ ಹಾಗೂ ಗಣಿತ ಶಿಕ್ಷಕರನ್ನೇ ರೂಪಿಸಿ ಒಂಭತ್ತರಿಂದ ಹನ್ನೆರಡನೆ ತರಗತಿಯ ವಿದ್ಯಾರ್ಥಿಗಳಿಗೆ ಪಾಠ ಮಾಡಲು ಶಿಕ್ಷಕರನ್ನು ರೂಪಿಸಲು ಸರ್ಕಾರದ ಪ್ರಯತ್ನಗಳೇನು?